## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ : 243

ಸದಸ್ಯರ ಹೆಸರು : ಶ್ರೀಮತಿ. ಎಸ್. ವೀಣಾ ಅಚ್ಚಯ್ಯ (ವಿಧಾನ ಸಭೆಯಿಂದ ಚುನಾಯಿತರಾದವರು )

ಉತ್ತರಿಸುವ ಸಚಿವರು : ಮಾನ್ಯ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು

ಉತ್ತರಿಸಬೇಕಾದ ದಿನಾಂಕ : 02-02-2021

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆಯಲ್ಲಿ ಪ್ರಸ್ತುತ ಬಿದ್ದ ಅಕಾಲಿಕ ಮಳೆಯಿಂದ ಕಾಫಿ ಕೊಯ್ಲು ಸಾಕಷ್ಟು ಹಾಳಾಗಿರುವುದರಿಂದ, ಕಾಫಿ ಬೆಳೆಗಾರರು ತೀವ್ರ ಸಂಕಷ್ಟಕ್ಕೆ ಸಿಲುಕಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ.<br>Noticed |
| ಆ) | ಬಂದಿದ್ದಲ್ಲಿ, ಪ್ರಸ್ತುತ ವರ್ಷದಲ್ಲಿ ಕೊಡಗು ಜಿಲ್ಲೆಯಲ್ಲಿ ಎಷ್ಟು ಕಾಫಿ ಕೊಯ್ಲು ಹಾನಿಗೊಳಗಾಗಿದೆ; ಹಾಗೂ ಸದರಿ ನಷ್ಟದ ಅಂದಾಜಿನ ಸಂಪೂರ್ಣ ವಿವರಗಳೇನು | ಪ್ರಸ್ತುತ ವರ್ಷದಲ್ಲಿ ಕೊಡಗು ಜಿಲ್ಲೆಯಲ್ಲಿ ಬಿದ್ದ ಅಕಾಲಿಕ ಮಳೆ ಹಾಗೂ ಪ್ರತಿಕೂಲ ಹವಾಮಾನದ ಪ್ರಯುಕ್ತ 33631 ಹೆ. ವಿಸ್ತೀರ್ಣದಲ್ಲಿ ಕಾಫಿ ಬೆಳೆ ಹಾನಿಯಾಗಿದ್ದು, ಇದರ ಹಾನಿಯ ಮೊತ್ತ ರೂ.391.70 ಕೋಟಿಗಳೆಂದು ಅಂದಾಜಿಸಲಾಗಿರುತ್ತದೆ.<br>Due to untimely rains and adverse weather conditions in Kodagu district, an area of 33631 ha. of coffee is affected and its value is estimated to be Rs. 391.70 crores. |
| ಇ) | ಈ ಕಾರಣದಿಂದ ಆರ್ಥಿಕ ಸಂಕಷ್ಟದಲ್ಲಿರುವ ಕಾಫಿ ಬೆಳೆಗಾರರಿಗೆ, ಸರ್ಕಾರ ಕಲ್ಪಿಸಿರುವ ಪರಿಹಾರ, ನೆರವು ಹಾಗೂ ಸೌಲಭ್ಯಗಳೇನು? (ಸಂಪೂರ್ಣ ವಿವರ ನೀಡುವುದು) | ಕಾಫಿ ಬೆಳೆ ಹಾನಿ ವರದಿಯನ್ನು ಪರಿಹಾರ ಧನ ಕೋರಿ ಕೇಂದ್ರ ಸರ್ಕಾರಕ್ಕೆ ಕಂದಾಯ ಇಲಾಖೆಯ ವಿಪತ್ತು ನಿರ್ವಹಣಾ ಕೋಶದ ಮೂಲಕ ಮೆಮೊರಾಂಡಮ್ ನ್ನು ಸಲ್ಲಿಸಲಾಗಿರುತ್ತದೆ.<br>NDRF/SDRF ಮಾರ್ಗಸೂಚಿಯನ್ವಯ ಶೇ.33 ಕ್ಕಿಂತ ಹೆಚ್ಚಿನ ಪ್ರಮಾಣದ ಹಾನಿಗೆ ಕಾಫಿ ಸೇರಿದಂತೆ ಪ್ರತಿ ಹೆಕ್ಟೇರ್‌ಗೆ ಬಹುವಾರ್ಷಿಕ ತೋಟಗಾರಿಕೆ ಬೆಳೆಗಳಿಗೆ ರೂ 18,000/ಹೆ. ಪರಿಹಾರ ಧನ ನಿಗದಿ ಪಡಿಸಲಾಗಿರುತ್ತದೆ. ಕಾಫಿ ಮಂಡಳಿ, ಬೆಂಗಳೂರು ರವರು ನೀಡಿರುವ ಮಾಹಿತಿಯಂತೆ, ಕೊಡಗು ಜಿಲ್ಲೆಯಲ್ಲಿ ಹಾನಿಯಾದ ಕಾಫಿ ಬೆಳೆಯನ್ನೊಳಗೊಂಡಂತೆ ಇತರೆ ತೋಟಗಾರಿಕೆ ಹಾಗೂ ಕೃಷಿ ಬೆಳೆಗಳು ಸೇರಿದಂತೆ ಈ ತನಕ ಒಟ್ಟು 21,496 ಫಲಾನುಭವಿಗಳಿಗೆ ರೂ.27.26 ಕೋಟಿ ಪರಿಹಾರಧನ ವಿತರಣೆಯಾಗಿರುತ್ತದೆ.<br>ಕಾಫಿ ಬೆಳೆಗಾರರಿಗೆ ನೆರವಾಗಲು ಕಾಫಿ ಮಂಡಳಿ ವತಿಯಿಂದ ಅಭಿವೃದ್ಧಿ ಉತ್ತೇಜಿತ ಕಾರ್ಯಕ್ರಮಗಳನ್ನು 10 ಹೆ. ವರೆಗೆ ಹೊಂದಿರುವ ಸಣ್ಣ ರೈತರುಗಳಿಗೆ ಘಟಕದ ವೆಚ್ಚಕ್ಕೆ ಶೇ. 40 ರಷ್ಟು ಆರ್ಥಿಕ ನೆರವನ್ನು ಈ |

ಕೆಳಕಂಡ ಕಾರ್ಯಕ್ರಮಗಳಿಗೆ ಒದಗಿಸಲಾಗಿರುತ್ತದೆ.

1) ತೋಟ ಮರು ಸ್ಥಾಪನೆ: ಕಾಫಿ ತೋಟಗಳಲ್ಲಿ ಉತ್ಪಾದನೆ ಹಾಗೂ ಉತ್ಪಾದಕತೆ ಹೆಚ್ಚಿಸುವ ಸಲುವಾಗಿ ಹಳೆಯ ಮತ್ತು ಅನುತ್ಪಾದಕ ಕಾಫಿ ತೋಟಗಳ ಪುನರುಜ್ಜೀವನ ಕಾರ್ಯಕ್ರಮವಾಗಿ ರೋಗ ನಿರೋಧಕ ಹಾಗೂ ಹೆಚ್ಚಿನ ಇಳುವರಿ ನೀಡುವ ಕಾಫಿ ತಳಿಗಳ ನಾಟಿ ಮಾಡಲು ಸಹಾಯಧನ ಕಲ್ಪಿಸಲಾಗಿರುತ್ತದೆ.
2) ನೀರು ನಿರ್ವಹಣೆ ಘಟಕ: ನೀರು ಶೇಖರಣಾ ಘಟಕಗಳ ಸ್ಥಾಪನೆಗೆ /ಯಂತ್ರೋಪಕರಣ ಖರೀದಿಗೆ ಆರ್ಥಿಕ ನೆರವು ಕಲ್ಪಿಸಲಾಗಿರುತ್ತದೆ.
3) ಪರಿಸರ ಸ್ನೇಹಿ ಕಾಫಿ: ರೈತರು ಹೆಚ್ಚಿನ ಆದಾಯಗಳಿಸಲು ಅನುಕೂಲವಾಗುವಂತೆ ಪರಿಸರ ಸ್ನೇಹಿ ಕಾಫಿ ಉತ್ಪಾದನೆಯ ಪ್ರಮಾಣೀಕರಣಕ್ಕೆ ಶೇ. 50 ರಂತೆ ಪ್ರಮಾಣೀಕರಣದ ವೆಚ್ಚವನ್ನು ಭರಿಸಲಾಗಿರುತ್ತದೆ.
4) ಕಾಫಿ ಬೆಳೆಗಾರರ ಗುಂಪು/ಸ್ವಯಂ ಸೇವಕ ಸಂಘಗಳು/ಸಹಕಾರ ಸಂಘಗಳಿಗೆ ಪ್ರೋತ್ಸಾಹಧನ: ಕಾಫಿ ಮಾರುಕಟ್ಟೆಗೆ ಉತ್ತೇಜಿಸಲು ಸಮುದಾಯತ್ವದಲ್ಲಿ ಕಾಫಿ ಬೆಳೆಗಾರರ ಗುಂಪು/ಸ್ವಯಂ ಸೇವಕ ಸಂಘಗಳು/ಸಹಕಾರ ಸಂಘಗಳಿಗೆ ಪ್ರತಿ ಕೆಜಿ ಕಾಫಿಗೆ ರೂ.4.00 ರಂತೆ ಪ್ರೋತ್ಸಾಹಧನವನ್ನು ನೀಡಲಾಗಿರುತ್ತದೆ.

A memorandum has been submitted to the Government of India seeking compensation for the Coffee crop damage through the Disaster Management cell of Revenue Department.

As per NDRF/SDRF guidelines for more than 33% crop loss Rs. 18000/ha. input subsidy is provided for perennial crops including coffee crop. As per the information provided by Coffee Board, Bangalore, including coffee and other horticultural and agricultural crops, a total of Rs 27.26 crore has been disbursed to 21,496 beneficiaries.

The small growers in Karnataka owning up to 10 Ha. area are provided support of 40% on the estimated unit cost for the following programmes by Coffee Board is as follows:

1) Replantation - To improve the production & productivity of plantations replacement of old and unproductive plants with high yielding and disease tolerant coffee varieties financial assistance is being provided.
2) Water Augmentation units - for creation of water

| | | |
|---|---|---|
| | | holding structures / purchase of equipment financial assistance is being provided.<br>3) Eco-Certification of Coffee - support @ 50% towards cost of eco certification is extended through production of eco-certified coffees to realize higher returns by farmers.<br>4) Support to Small Growers' Collectives / SHGs / Cooperatives - To encourage marketing of coffee growers Rs. 4/- per Kg is being given to coffee growers Collectives / SHGs / Cooperatives. |

HORTI 43 HEG 2021

(ಆರ್. ಶಂಕರ್)

ತೋಟಗಾರಿಕೆ ಮತ್ತು ರೇಷ್ಮೆ ಸಚಿವರು